# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1111
ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 29.09.2020
ಉತ್ತರಿಸುವ ಸಚಿವರು : ಸಹಕಾರ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಸಹಕಾರ ಇಲಾಖಾಯ ವಿವಿಧ ವಿಭಾಗಗಳಲ್ಲಿ ಸಿಬ್ಬಂದಿ ವರ್ಗದವರು ಅವ್ಯವಹಾರಗಳಲ್ಲಿ ಭಾಗಿಯಾಗಿರುವ ಎಷ್ಟು ಪ್ರಕರಣಗಳು ಗುರುತಿಸಲ್ಪಟ್ಟಿವೆ; ಅವರುಗಳ ಮೇಲೆ ಕಾನೂನು ಪ್ರಕಾರ ತೆಗೆದುಕೊಂಡಿರುವ ಕ್ರಮಗಳೇನು: (ಕಳೆದ 2 ವರ್ಷಗಳ ಮಾಹಿತಿ ನೀಡುವುದು)</td><td>ಸಹಕಾರ ಇಲಾಖೆಯ ವ್ಯಾಪ್ತಿಗೊಳಪಡುವ 4 ಇಲಾಖೆಗಳ ಸಿಬ್ಬಂದಿ ವರ್ಗದವರು ಅವ್ಯವಹಾರಗಳಲ್ಲಿ ಭಾಗಿಯಾಗಿರುವ ಪ್ರಕರಣಗಳ ಎರಡು ವರ್ಷಗಳ ಮಾಹಿತಿಯು ಈ ಕೆಳಕಂಡಂತಿದೆ:-<br><table><tr><th>ಕ್ರ.ಸಂ.</th><th>ಇಲಾಖೆ</th><th>ಪ್ರಕರಣಗಳ ಸಂಖ್ಯೆ</th></tr><tr><td>1</td><td>ಸಹಕಾರ ಸಂಘಗಳ ನಿಬಂಧಕರ ಇಲಾಖೆ</td><td>06</td></tr><tr><td>2</td><td>ಕೃಷಿ ಮಾರಾಟ ಇಲಾಖೆ</td><td>19</td></tr><tr><td>3</td><td>ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ</td><td>ಯಾವುದು ಇರುವುದಿಲ್ಲ</td></tr><tr><td>4</td><td>ಕರ್ನಾಟಕ ರಾಜ್ಯ ಉಗ್ರಾಣ ನಿಗಮ</td><td>09</td></tr></table><br>ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರನ್ವಯ ಕ್ರಮ ಕೈಗೊಳ್ಳಲಾಗುತ್ತಿದೆ.</td></tr>
<tr><td>ಆ</td><td>ಎಷ್ಟು ಜನರನ್ನು ಅಮಾನತ್ತುಗೊಳಿಸಿ ಶಿಸ್ತು ಕ್ರಮಗಳನ್ನು ಕೈಗೊಳ್ಳಲಾಗಿದೆ: ಕೋರ್ಟಿನ ಮುಂದೆ ಎಷ್ಟು ಪ್ರಕರಣಗಳಿವೆ:</td><td>31 ಜನರನ್ನು ಅಮಾನತ್ತಿನಲ್ಲಿರಿಸಿದ್ದು, ನಿಯಮಾನುಸಾರ ವಿಚಾರಣೆ ನಡೆಸಿ ಶಿಸ್ತು ಕ್ರಮ ಜರುಗಿಸಲಾಗುತ್ತಿದೆ.<br><br>ಸಹಕಾರ ಸಂಘಗಳ ನಿಬಂಧಕರ ಇಲಾಖೆಗೆ ಸಂಬಂಧಿಸಿದ 1 ಪ್ರಕರಣ ಮಾತ್ರ ನ್ಯಾಯಾಲಯದಲ್ಲಿ ಬಾಕಿ ಇರುತ್ತದೆ.</td></tr>
<tr><td>ಇ</td><td>ಇಲಾಖೆಯ ಸಿಬ್ಬಂದಿ ವರ್ಗದವರು ಮಾದರಿ ಸರ್ಕಾರಿ ನೌಕರರು ಮತ್ತು ಅಧಿಕಾರಿಗಳಾಗಿ ನಿಷ್ಠೆಯಿಂದ ಕರ್ತವ್ಯ ನಿರ್ವಹಣೆ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?</td><td>ಇಲಾಖೆಯ ಸಿಬ್ಬಂದಿ ವರ್ಗದವರು ಕರ್ತವ್ಯ ನಿರ್ವಹಣೆಯಲ್ಲಿ ನಿರ್ಲಕ್ಷತನ ತೋರಿದಲ್ಲಿ ತಿಳುವಳಿಕೆ ಪತ್ರ, ನೋಟೀಸ್ ನೀಡಿ ಎಚ್ಚರಿಕೆಯಿಂದ ಕರ್ತವ್ಯ ನಿರ್ವಹಿಸುವಂತೆ ತಿಳಿಸುವ ಹಾಗೂ ಕಾರ್ಯಕ್ಷಮತೆಯನ್ನು ಹೆಚ್ಚಿಸಿಕೊಳ್ಳಲು ಕಾಲಕಾಲಕ್ಕೆ ಅವಶ್ಯಕ ತರಬೇತಿ / ಸಲಹೆ ಸೂಚನೆಗಳನ್ನು ನೀಡುವ ಮೂಲಕ ಮಾದರಿ ಸರ್ಕಾರಿ ಅಧಿಕಾರಿ / ನೌಕರರಾಗಿ ನಿಷ್ಠೆಯಿಂದ ಕರ್ತವ್ಯ ನಿರ್ವಹಣೆ ಮಾಡಲು ಕ್ರಮಗಳನ್ನು ಕೈಗೊಳ್ಳಲಾಗಿದೆ.</td></tr>
</table>

ಸಂಖ್ಯೆ: ಸಇ 148 ರರವಿ 2020

(ಎಸ್.ಟಿ.ಸೋಮಶೇಖರ್)
ಸಹಕಾರ ಸಚಿವರು